# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 03

ಸದಸ್ಯರ ಹೆಸರು : ಶ್ರೀ ಹೆಚ್.ಎಂ. ರಮೇಶಗೌಡ

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 29.01.2021

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸಾರಿಗೆ ಸಂಸ್ಥೆಯ ಬಸ್ ನಿಲ್ದಾಣಗಳಲ್ಲಿ ಅನೇಕ ಕಡೆ ಉತ್ತಮ ಉಪಹಾರಗೃಹ ಮತ್ತು ಶೌಚಾಲಯಗಳ ವ್ಯವಸ್ಥೆ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು; | ಸಾರಿಗೆ ಸಂಸ್ಥೆಗಳ ಬಸ್ ನಿಲ್ದಾಣಗಳಲ್ಲಿ ಸಾರ್ವಜನಿಕ ಪ್ರಯಾಣಿಕರಿಗೆ ಉತ್ತಮ ಗುಣಮಟ್ಟದ ಆಹಾರ ಒದಗಿಸುವ ಸಲುವಾಗಿ ಉಪಾಹಾರ ಗೃಹದ ಸೌಲಭ್ಯವನ್ನು ಒದಗಿಸಲಾಗಿರುತ್ತದೆ. ಇದರ ನಿರ್ವಹಣೆಗಾಗಿ ಟೆಂಡರ್ ಮೂಲಕ ಅರ್ಹ/ಅನುಭವವುಳ್ಳ ಹೋಟೆಲ್ ಉದ್ದಿಮೆದಾರರನ್ನು ಆಯ್ಕೆ ಮಾಡಲಾಗುತ್ತಿರುತ್ತದೆ. ಕೋವಿಡ್-19ರ ಪರಿಣಾಮದಿಂದ ಉಪಹಾರಗೃಹಗಳಿಗೆ ಬೇಡಿಕೆ ಕಡಿಮೆ ಇರುತ್ತದೆ. ಆದಾಗ್ಯೂ, ಖಾಲಿ ಇರುವ ಉಪಹಾರಗೃಹಗಳ ನಿರ್ವಹಣೆಗೆ ಶೀಘ್ರವಾಗಿ ಇ-ಟೆಂಡರ್/ಸಂಧಾನದ ಮೂಲಕ ಪರವಾನಗಿದಾರರ ಆಯ್ಕೆಗೆ ಕ್ರಮ ಕೈಗೊಳ್ಳಲಾಗಿರುತ್ತದೆ.<br><br>ಶೌಚಾಲಯಗಳನ್ನು ನಿರ್ವಹಿಸಲು ಇ-ಟೆಂಡರ್ ಮೂಲಕ ಖಾಸಗಿ ಸ್ವಚ್ಛತಾ ಗುತ್ತಿಗೆದಾರರನು ಆಯ್ಕೆ ಮಾಡಿ ನಿರ್ವಹಣೆ ಮಾಡಲಾಗುತ್ತಿದೆ. |
| ಆ) | ಬಸ್ ನಿಲ್ದಾಣಗಳಲ್ಲಿರುವ ಶೌಚಾಲಯಗಳಲ್ಲಿ ಸಾರ್ವಜನಿಕರಿಂದ ಶುಲ್ಕ ಪಡೆದರೂ ಸ್ವಚ್ಛತೆಯನ್ನು ಕಾಪಾಡುತ್ತಿಲ್ಲದಿರುವುದರಿಂದ ಖಾಸಗಿಯವರಿಗೆ ವಹಿಸಿ ಸ್ವಚ್ಛತೆಯನ್ನು ಕಾಪಾಡುವ ವ್ಯವಸ್ಥೆ ಮಾಡಲಾಗುವುದೆ? | ಬಸ್ ನಿಲ್ದಾಣಗಳಲ್ಲಿರುವ ಶೌಚಾಲಯದ ಬಳಕೆಗಾಗಿ ಸಾರ್ವಜನಿಕರಿಂದ ನಿಗದಿತ ಶುಲ್ಕವನ್ನು ಪಡೆದು ನಿರಂತರವಾಗಿ ಸ್ವಚ್ಛತೆಯನ್ನು ಕಾಪಾಡಲು ಇ-ಟೆಂಡರ್ ಮೂಲಕ ನೊಂದಾಯಿತ ಸ್ವಚ್ಛತಾ ಗುತ್ತಿಗೆದಾರರನ್ನು ಆಯ್ಕೆ ಮಾಡಿ ನಿರ್ವಹಿಸಲಾಗುತ್ತಿದೆ.<br><br>ನಿರ್ದಿಷ್ಟ ದೂರುಗಳು ಬಂದಲ್ಲಿ ಕೂಡಲೇ ಅಗತ್ಯ ಕ್ರಮವಹಿಸಲಾಗುವುದು. |

ಸಂಖ್ಯೆ: ಟಿಡಿ 05 ಟಿಸಿಕ್ಯೂ 2021

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು